## ಕರ್ನಾಟಕ ವಿಧಾನ ಪರಿಷತ್ತು

1 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 506

2 ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು)

3 ಉತ್ತರಿಸುವ ದಿನಾಂಕ : 16.12.2021

4 ಉತ್ತರಿಸುವ ಸಚಿವರು : ಗೃಹ ಸಚಿವರು

| ಪ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2021ನೇ ಸಾಲಿನಲ್ಲಿ ಚಿಕ್ಕಮಗಳೂರು ಜಿಲ್ಲೆಯ ಗೋಣಿಬಿಡು ಠಾಣೆಯ ಕಿರುಗುಂದ ಗ್ರಾಮದ ದಲಿತ ಯುವಕನೊಬ್ಬನ ಮೇಲಾದ ದೌರ್ಜನ್ಯದ ಪ್ರಕರಣ ಸರ್ಕಾರದ ಗಮನಕ್ಕೆ ಬಂದಿದೆಯೇ; | ಗಮನಕ್ಕೆ ಬಂದಿರುತ್ತದೆ. |
| ಆ) | ಬಂದಿದ್ದಲ್ಲಿ, ಈ ಪ್ರಕರಣದಲ್ಲಿ ಭಾಗಿಯಾಗಿದ್ದ ಸಬ್ ಇನ್ಸ್‌ಪೆಕ್ಟರ್ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ ಮತ್ತು ಯಾವ ಕಾಯ್ದೆಯಡಿ ಪ್ರಕರಣವನ್ನು ದಾಖಲು ಮಾಡಲಾಗಿದೆ; | ದಿನಾಂಕ:22.05.2021 ರಂದು ಮೂಡಿಗೆರೆ ತಾಲ್ಲೂಕ್ ಕಿರುಗುಂದ ಗ್ರಾಮದ 22 ವರ್ಷ ವಯಸ್ಸಿನ ಸಂತ್ರಸ್ತ ಯುವಕ ಶ್ರೀ ಪುನೀತ್ ಕೆ. ಎಲ್. ರವರ ಮೇಲೆ ದೌರ್ಜನ್ಯ ನಡೆದ ಬಗ್ಗೆ ಶ್ರೀ ಅರ್ಜುನ್, ಪಿಎಸ್ಐ, ಗೋಣಿಬಿಡು ಪೊಲೀಸ್ ಠಾಣೆರವರ ವಿರುದ್ಧ ಗೋಣಿಬಿಡು ಪೊಲೀಸ್ ಠಾಣಾ ಮೊ.ನಂ. 18/2021, ಕಲಂ: 323, 342, 504, 506, 330, 348 ಐಪಿಸಿ ಸಹಿತ ಕಲಂ: 3(1)(a)(e)(r), 3(2) (va), (vii) SC/ST (POA) AMENDMENT ACT 2015 ರೀತ್ಯಾ ಪ್ರಕರಣ ದಾಖಲಾಗಿರುತ್ತದೆ. |
| ಇ) | ಹಾಗಿದ್ದಲ್ಲಿ, ಈ ಸಬ್ ಇನ್ಸ್‌ಪೆಕ್ಟರ್‌ನ್ನು ಬಂಧಿಸಲಾಗಿದೆಯೇ; ಬಂಧಿಸಿದ್ದಲ್ಲಿ ಯಾವಾಗ; ಬಂಧಿಸಲಾಗಿದೆ? | ಸಬ್ ಇನ್ಸ್‌ಪೆಕ್ಟರ್ ಶ್ರೀ ಅರ್ಜುನ್ ಹೊರಕೇರಿ. ಕೆ., ರವರನ್ನು ಪ್ರಕರಣದ ತನಿಖಾಧಿಕಾರಿಯಾದ ಡಿ.ವೈ.ಎಸ್.ಪಿ., ಸಿ.ಐ.ಡಿ., ಬೆಂಗಳೂರು ರವರು ದಿನಾಂಕ: 01/09/2021 ರಂದು ದಸ್ತಗಿರಿ ಮಾಡಿ ದಿನಾಂಕ: 02.09.2021 ರಂದು ಘನ ನ್ಯಾಯಾಲಯದ ಮುಂದೆ ಹಾಜರುಪಡಿಸಿದ್ದು, ನ್ಯಾಯಾಂಗ ಬಂಧನದಲ್ಲಿದ್ದು, ದಿನಾಂಕ: 26.11.2021ರಂದು ನ್ಯಾಯಾಲಯದ ಜಾಮೀನಿನ ಮೇಲೆ ಬಿಡುಗಡೆಯಾಗಿರುತ್ತಾರೆ. |

....2)

| | | |
|---|---|---|
| ಈ) | ದೌರ್ಜನ್ಯಕ್ಕೆ ಒಳಗಾದ ದಲಿತ ಯುವಕರಿಗೆ ಪರಿಹಾರ ನೀಡಲಾಗಿದೆಯೇ; ನೀಡಿದ್ದಲ್ಲಿ ಪರಿಹಾರದ ಮೊತ್ತ ಎಷ್ಟು; | ದೌರ್ಜನ್ಯಕ್ಕೆ ಒಳಗಾದ ಯುವಕ ಶ್ರೀ ಪುನೀತ್ ಕೆ. ಎಲ್. ರವರಿಗೆ ದಿನಾಂಕ 24.05.2021 ರಂದು ರೂ.50,000.00 (ಶೇಕಡ 25 ಭಾಗ, 1ನೇ ಕಂತು) ಪರಿಹಾರ ಧನವನ್ನು ಮಾನ್ಯ ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ರವರು ಅಧಿಕೃತ ಜ್ಞಾಪನ ಸಂಖ್ಯೆ. ಉನಿ:ಸಕಇ:ದೌರ್ಜನ್ಯ:ಸಿಆರ್:11:2021–22, ದಿನಾಂಕ: 23.05.2021 ರೀತ್ಯಾ ಮಂಜೂರು ಮಾಡಿ ಚೆಕ್ ನಂ.865269, ದಿನಾಂಕ 24.05.2021 ಮೂಲಕ ನೀಡಿರುತ್ತಾರೆ. |

ಸಂಖ್ಯೆ: ಒಇ 124 ಪಿಇಐ 2021

(ಆರಗ ಜ್ಞಾನೇಂದ್ರ)
ಗೃಹ ಸಚಿವರು